

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 871 |
| ಸದಸ್ಯರ ಹೆಸರು | : | ಡಾ॥ ಜೈಮಾಲ ರಾಮಚಂದ್ರ |
| ಉತ್ತರಿಸುವ ದಿನಾಂಕ | : | 11/03/2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸಮಾಜ ಕಲ್ಯಾಣ ಇಲಾಖಾ ವ್ಯಾಪ್ತಿಯ ವಿದ್ಯಾರ್ಥಿ ವಸತಿ ನಿಲಯಗಳ ಸಂಖ್ಯೆ ಎಷ್ಟು; ಕಳೆದ 3 ವರ್ಷಗಳಿಂದ ಈ ವಿದ್ಯಾರ್ಥಿ ನಿಲಯಗಳಿಗೆ ನೇಮಕಗೊಂಡ ಸಹಾಯಕರುಗಳ ಸಂಖ್ಯೆ ಎಷ್ಟು; | ಸಮಾಜ ಕಲ್ಯಾಣ ಇಲಾಖೆ ವತಿಯಿಂದ ನಡೆಸುತ್ತಿರುವ ವಿದ್ಯಾರ್ಥಿ ನಿಲಯಗಳ ವಿವರ ಈ ಕೆಳಕಂಡಂತಿದೆ.<br><table><tr><th>ಕ್ರ. ಸಂ</th><th>ವಿವರ</th><th>ಪರಿಶಿಷ್ಟ ಜಾತಿ</th><th>ಪರಿಶಿಷ್ಟ ಪಂಗಡ</th></tr><tr><td>1</td><td>ಮೆಟ್ರಿಕ್ ಪೂರ್ವ ವಿದ್ಯಾರ್ಥಿನಿಲಯಗಳು</td><td>1233</td><td>136</td></tr><tr><td>2</td><td>ಮೆಟ್ರಿಕ್ ನಂತರದ ವಿದ್ಯಾರ್ಥಿನಿಲಯಗಳು</td><td>634</td><td>119</td></tr></table><br>ಸರ್ಕಾರದ ಆದೇಶ ದಿನಾಂಕ:29-09-2016 ರಲ್ಲಿ ಸಮಾಜ ಕಲ್ಯಾಣ ಇಲಾಖೆಯ ವಿದ್ಯಾರ್ಥಿ ನಿಲಯಗಳು ಮತ್ತು ವಸತಿ ಶಾಲೆಗಳಲ್ಲಿ ಖಾಲಿ ಇದ್ದ 885 ಅಡುಗೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಸಮಿತಿ ರಚಿಸಿ ಆದೇಶಿಸಲಾಗಿರುತ್ತದೆ.<br><br>ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಆಯ್ಕೆ ಪ್ರಕ್ರಿಯೆಯನ್ನು ಕೈಗೊಂಡಿದ್ದು 885 ಹುದ್ದೆಗಳ ಪೈಕಿ 623 ಅಡುಗೆ ಸಹಾಯಕರ ಹುದ್ದೆಗಳನ್ನು ಭರ್ತಿ ಮಾಡಲಾಗಿರುತ್ತದೆ. ಉಳಿದಂತೆ ಅರ್ಹ ಅಭ್ಯರ್ಥಿಗಳು ಲಭ್ಯವಿಲ್ಲದ ಪ್ರಯುಕ್ತ ಬಾಕಿ ಇರುವ 262 ಅಡುಗೆ ಸಹಾಯಕರ ಹುದ್ದೆಗಳನ್ನು ಹೊಸದಾಗಿ ಭರ್ತಿ ಮಾಡಲು ಕ್ರಮವಹಿಸಲಾಗುವುದು. |

| | | |
|---|---|---|
| ಆ) | ಈ ವಿದ್ಯಾರ್ಥಿ ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅನುಗುಣವಾಗಿ ಅಡುಗೆ ಸಹಾಯಕರುಗಳು ಹಾಗೂ ಇನ್ನಿತರ ಸಿಬ್ಬಂದಿಗಳು ಕಾರ್ಯ ನಿರ್ವಹಿಸುತ್ತಿದ್ದಾರೆಯೇ; ಇವರುಗಳು ಖಾಯಂ ನೌಕರರುಗಳೇ; | ಈ ವಿದ್ಯಾರ್ಥಿ ವಸತಿ ನಿಲಯಗಳಲ್ಲಿ ವಿದ್ಯಾರ್ಥಿಗಳಿಗೆ ಅನುಗುಣವಾಗಿ ಅಡುಗೆ ಸಹಾಯಕರು ಹಾಗೂ ಇನ್ನಿತರ ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದಾರೆ.<br>ಸರ್ಕಾರದ ಸುತ್ತೋಲೆ ಸಂಖ್ಯೆ: ಸಕಇ 124 ಪಕವಿ 2019 ದಿನಾಂಕ:17-07-2019 ರಲ್ಲಿ ಪ್ರವೇಶಾತಿ ಕೋರಿ ಬಂದಿರುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಎಲ್ಲಾ ವಿದ್ಯಾರ್ಥಿಗಳಿಗೆ ಹಾಸ್ಟೆಲ್ ಸೌಲಭ್ಯ ಕಲ್ಪಿಸುವಂತೆ ತಿಳಿಸಲಾಗಿರುತ್ತದೆ. ಅದರಂತೆ, ವಿದ್ಯಾರ್ಥಿ ನಿಲಯದ ಮಂಜೂರಾತಿ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ದಾಖಲಾಗಿರುತ್ತಾರೆ. ಆದರೆ ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗನುಗುಣವಾಗಿ ಸಿಬ್ಬಂದಿಗಳ ಮಂಜೂರಾತಿ ಇರುವುದಿಲ್ಲ. ಸರ್ಕಾರದ ಆದೇಶ ಸಂಖ್ಯೆ: ಪಿಎಸ್‌ಡಬ್ಲ್ಯೂ 71 ಎಸ್‌ಇಡಬ್ಲ್ಯೂ 68 ಬೆಂಗಳೂರು, ದಿನಾಂಕ:22-07-1968 ರಲ್ಲಿ ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ Staff Pattern ನ್ನು ಅನುಬಂಧದಲ್ಲಿ ಲಗತ್ತಿಸಿದೆ. |
| ಇ) | ಖಾಯಂ ನೌಕರರುಗಳಲ್ಲದೇ ಗುತ್ತಿಗೆ ನೌಕರರುಗಳಿಂದ ಈ ವಿದ್ಯಾರ್ಥಿ ವಸತಿ ನಿಲಯಗಳನ್ನು ಸರಿಯಾದ ರೀತಿಯಲ್ಲಿ ನಡೆಸಲು ಸಾಧ್ಯವೇ; ಖಾಯಂ ನೌಕರರುಗಳಿದ್ದರೆ ಜವಾಬ್ದಾರಿಯುತವಾಗಿ ಕೆಲಸವನ್ನು ನಿರ್ವಹಿಸಲು ಸಾಧ್ಯವಿಲ್ಲವೇ? | ಖಾಯಂ ಸಿಬ್ಬಂದಿಗಳಿದ್ದಲ್ಲಿ ಅವರ ಮೇಲೆ ಇಲಾಖಾ ನಿಯಂತ್ರಣವಿರುತ್ತದೆ. ಅಲ್ಲದೇ ಸುಸೂತ್ರ ನಿರ್ವಹಣೆ ನಡೆಸಬಹುದಾಗಿರುತ್ತದೆ. |

ಸಕಇ 166 ಪಕವಿ 2020

(ಗೋವಿಂದ ಎಂ.ಕಾರಜೋಳ)
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು

## ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:871 ಕ್ಕೆ ಅನುಬಂಧ-1

## ವಿದ್ಯಾರ್ಥಿಗಳ ದಾಖಲಾತಿ ಸಂಖ್ಯೆಗೆ ಅನುಗುಣವಾಗಿ ಸಿಬ್ಬಂದಿಗಳ ವಿವರ

| ಕ್ರ.ಸಂ. | ವಿದ್ಯಾರ್ಥಿಗಳ ಸಂಖ್ಯೆ | ಅಡುಗೆಯವರ ಸಂಖ್ಯೆ | ಅಡುಗೆ ಸಹಾಯಕರ ಸಂಖ್ಯೆ | ಒಟ್ಟು | ಷರಾ |
|---|---|---|---|---|---|
| 1. | 0-25 | 1 | 1 | 2 | - |
| 2. | 26-50 | 2 | 1 | 3 | ಒಂದು ಅಡುಗೆಯವರ ಹುದ್ದೆ ಹೆಚ್ಚುವರಿ ಸೃಜನೆ |
| 3. | 51-75 | 2 | 2 | 4 | ಒಂದು ಅಡುಗೆ ಸಹಾಯಕರ ಹುದ್ದೆ ಹೆಚ್ಚುವರಿ ಸೃಜನೆ |
| 4. | 76-100 | 3 | 2 | 5 | ಒಂದು ಅಡುಗೆಯವರ ಹುದ್ದೆ ಹೆಚ್ಚುವರಿ ಸೃಜನೆ |
| 5. | 101-125 | 3 | 2 | 5 | -ಅದೇ- |
| 6. | 126-150 | 4 | 2 | 6 | ಒಂದು ಅಡುಗೆಯವರ ಹುದ್ದೆ ಹೆಚ್ಚುವರಿ ಸೃಜನೆ |
| 7. | 151-175 | 4 | 2 | 6 | -ಅದೇ- |
| 8. | 176-200 | 5 | 2 | 7 | ಒಂದು ಅಡುಗೆಯವರ ಹುದ್ದೆ ಹೆಚ್ಚುವರಿ ಸೃಜನೆ |

ಸಕಇ 166 ಪಕವಿ 2020